# ಕಾನನ

## ನಿಸರ್ಗದೆಡೆಗೆ ಪಯಣ

- ಹಿಮಾಲಯದ ಅತಿಥಿ
- ಕಾಡು ಬರಿದಾಗಿಸುವ ಬೆಂಕಿ.
- ಪ್ರಕೃತಿಯಿಂದಲೇ (ಕವನ)
- ಪ್ರಕೃತಿ ಬಿಂಬ




**ಸಂಕಲನ & ವಿನ್ಯಾಸ**

ಶಂಕರಪ್ಪ ಕೆ ಪಿ

**ಛಾಯಾಚಿತ್ರಗಳು**

ವಿಪಿನ್ ಬಳಿಗ

ಕಾರ್ತಿಕ್

*ಮುಖಪುಟ : ಜೇನು ನೊಣ*

***E-MAIL***

*kaanana.mag@gmail.com*

# ಹಕ್ಕಿ ಲೋಕ



ULTRA MARINE FLYCATCHER

*Ficcedula superciliaris*

### * ಹಿಮಾಲಯದ ಅತಿಥಿ ಮತ್ತು ಟೆಕ್ಕಿ ರವಿ.

ಅಂದು ಶನಿವಾರ ನಾನು ಮತ್ತು ನನ್ನ ಸ್ನೇಹಿತ ಟೆಕ್ಕಿ ರವಿ ಇಬ್ಬರು ಸುಮ್ಮನೆ ಕಾಡಂಚಿನಲ್ಲಿ ಸುತ್ತಾಡಲು ಹೋಗಿದ್ದೆವು. ರವಿ ಸಧ್ಯಕ್ಕೆ ಪಕ್ಕಾ ಬಿಡುವುಳ್ಳವನು. ತನ್ನ ಸ್ನಾತಕೋತ್ತರ ಪದವಿ ಮುಗಿಸಿ, ಕೆಲಸದ ಬೇಟೆಯಲ್ಲಿ ತನ್ನ ತನು-ಮನವನ್ನು ಪೂರ್ಣವಾಗಿ ತೊಡಗಿಸಿಕೊಂಡವನು.

ನಮ್ಮ ಪಯಣ ಕಾಡಂಚಿನ ದನದ ದಾರಿಯಲ್ಲಿ ಸಾಗಿತ್ತು. ಬಯಲಲ್ಲಿ ಗಾಳಿ ರೊಯ್ಯನೆ ಬೀಸುತಿತ್ತು. ಸೂರ್ಯನು ಉತ್ತರಾಭಿಮುಖವಾಗಿ ಚಲಿಸಲು ಶುರುವಾಗಿ ವಾರಗಳೇ ಕಳೆದಿದ್ದವು. ಅಲ್ಲಲ್ಲಿ ಎಸೆದಿದ್ದ ಹತ್ತಿಯಂತೆ ಕಾಣುತ್ತಿದ್ದ ಬಿಳಿ ಮೋಡಗಳು ಸದ್ದಿಲ್ಲದೆ ಚಲಿಸುತ್ತಿದ್ದವು. ನಾವು ಕೊರಮರದೊಡ್ಡಿ ಹಳ್ಳದಾಟಿ ಸಾಗುತ್ತಿದ್ದೆವು.



ದೂರದಲ್ಲಿ ಹೂತುಂಬಿ ನಿಂತಿದ್ದ ಮುತ್ತುಗದ ಮರ, ಬೆಂಕಿಯನ್ನೇ ಧರಿಸಿದಂತೆ ಕಾಣುತ್ತಿತ್ತು. ಅತ್ತಿಯ ಮರದ ತುದಿಯಲ್ಲಿ ಕುಳಿತ ಕುಟ್ರು ಹಕ್ಕಿ ಕುಟ್ರು. . . . ಕುಟ್ರು . . . . . ಎಂದು ಕೂಗುತ್ತಿತ್ತು.

ನಮ್ಮ ಎದುರಲ್ಲೇ ಕಣ್ಣಿನ ನೇರಕ್ಕೆ ಪುರ್ರನೆ ಹಾರಿದ ಎರಡು ಎಬ್ಬರೆಳು ಗಾತ್ರದ ಕಪ್ಪು ಹಕ್ಕಿಗಳು, ಅರ್ಕ್ಲೀಪಾರ್ಮ್ ಮರದ ಕೆಳರೆಂಬೆಯಲ್ಲಿ ಕುಳಿತವು. ನಾನಂತೂ ಈ ಎಬ್ಬರೆಳು ಗಾತ್ರದ ಕಪ್ಪು ಹಕ್ಕಿಗಳನ್ನು ನನ್ನ ಜೀವಮಾನದಲ್ಲೇ ನೋಡಿರಲಿಲ್ಲ! ಕಣ್ಣು ಮಿಟಕಿಸದೆ ಸೂಕ್ಷ್ಮವಾಗಿ ಗಮನಿಸುತಿದ್ದೆ. ಕಣ್ಣು ಆ ಕಪ್ಪು ಹಕ್ಕಿಗಳ ಹಿಂದೆ ರೊಂಬೆಯಿಂದ ರೊಂಬೆಗೆ ಚಲಿಸುತಿತ್ತು. ಕತ್ತಿನ ಸುತ್ತಾ ಕಡು ನೀಲಿ ಬಣ್ಣ, ಎದೆ ಮಾತು ಕತ್ತಿನ ಬಳಿ ಬಿಳಿ ನಾಮದ ರೀತಿ ಪಟ್ಟೆಯಿದೆ. ಬಾಲದ ಅಂಚಿನಲ್ಲಿ ಕಪ್ಪು ಮತ್ತು ಗಾಡ ನೀಲಿಯಿಂದ ಕೂಡಿದ ಪಟ್ಟೆಯಿದೆ. ಎಂದು ನೋಟ್ಸ್ ಮಾಡಿಕೊಂಡೆ.

ಈ ಟೆಕ್ಕಿ ರವಿಗೋ ಹಕ್ಕಿಯೂ ಕಾಣದು ಅದರ ಬಾಲವೂ ಕಾಣದು. ತನ್ನ ಸ್ಮಾರ್ಟ್ ಫೋನಿನಲ್ಲಿ ಮುಳುಗಲು ಪ್ರಯತ್ನಿಸುತ್ತಿದ್ದವನನ್ನು ಎಚ್ಚರಿಸಿ, “ನೋಡು ರವಿ ಇಲ್ಲಿ ನಿನಗೆ ಒಂದು ಹೊಸ ಹಕ್ಕಿ ತೋರಿಸುತ್ತೇನೆ.” ಎಂದು ಅಕೇಷಿಯಾ ಅರ್ಕ್ಲೀಪಾರ್ಮ ಮರದ ರೆಂಬೆಯಿಂದ ರೆಂಬೆಗೆ ಹಾರುತ್ತಿದ್ದ ಆ ಪುಟ್ಟ ಹಕ್ಕಿಯ ಕಡೆ ದೂರದಿಂದಲೇ ಕೈ ಮಾಡಿ ತೋರಿಸಿದೆ. ಅವನಿಗೆ ಮರವನ್ನು ಬಿಟ್ಟು ಮತ್ತೇನೂ ಕಾಣಲಿಲ್ಲ.

ಈ ಸಣ್ಣ ಹಕ್ಕಿಗಳನ್ನು ದೊಡ್ಡ ಮರದಲ್ಲಿ ಹುಡುಕುವುದು , ಸಮುದ್ರದಲ್ಲಿ ಸೂಜಿ ಹುಡುಕುವುದೂ ಒಂದೆ ನನಗೆ ಕಾಣಲಿಲ್ಲ ಹೋಗಪ್ಪ ಎಂದು ಮತ್ತೆ ಫೋನಿನ ಮೇಲೆ ಬೆರಳಾಡಿಸಿದ. ಸೂಕ್ಷ್ಮವಾಗಿ ಗಮನಿಸದ ವರೆತು ಈ ಸಣ್ಣ ಹಕ್ಕಿಗಳನ್ನೋ ಕೀಟಗಳನ್ನೋ ಇನ್ನೋಬ್ಬರಿಗೆ ತೋರಿಸುವುದು ತುಂಬಾ ಕಷ್ಟದ ಕೆಲಸ. ಪಕ್ಷಿ ನಮಗೆ ಕಾಣುತ್ತಿರುತ್ತದೆ, ಅವರಿಗೆ ಕಾಣುವುದಿಲ್ಲ. ನಾವು ತೋರುವ ಕಡೆ ಅವರು ನೋಡುವುದಿಲ್ಲ. ಕೊನೆಗು ರವಿ ತನ್ನ ಕನ್ನಡಕವನ್ನು ಸರಿಮಾಡಿಕೊಂಡು ಹಕ್ಕಿ ಕುಳಿತ ರೆಂಬೆಯ ನೇರಕ್ಕೆ ತನ್ನ ಸ್ಮಾರ್ಟ್ ಫೋನಿನಲ್ಲಿ ಝೂಮ್ ಮಾಡಿ, ಹಲವು ಫೋಟೊಗಳನ್ನು ಕ್ಲಿಕ್ಕಿಸಿದ. ಆ ಕ್ಲಿಕ್ಕಿನ ಶಬ್ದಕ್ಕೆ ಅವು ಹಾರಿ ಹೋದವು.



“ಓ ಇಲ್ಲೇ ಇದ್ದವು! ” ಎಂದು ಅಚ್ಚರಿಪಟ್ಟ. ನಾನು ನನ್ನ ನೋಟ್ಸನ್ನು ತೆಗೆದು, ಗ್ರಿಮ್ಮೆಟ್ ರ ಭಾರತದ ಹಕ್ಕಿಗಳು ಪುಸ್ತಕದಲ್ಲಿ ಯಾವುದಿರಬಹುದೆಂದು ಹುಡುಕುತ್ತಿದ್ದರೆ. ಟೆಕ್ಕಿ ರವಿ ಮತ್ತೆ ತನ್ನ ಮೊಬೈಲ್ ನಲ್ಲಿ ಮುಳುಗಿ ಈ ಹೊಸ ಹಕ್ಕಿಯ ಫೋಟೊವನ್ನು ತನ್ನ ಗೆಳೆಯ ಗೆಳತಿಯರಿಗೆ ವಾಟ್ಸ್ ಅಪ್ ಮಾಡಿದ . ಗೂಗಲ್ ಮಾಡಿದ, ಇನ್ನೂ ಏನೇನೋ ಮಾಡುತ್ತಾ

ಕತ್ತು ಬಗ್ಗಿಸಿ ಸ್ಕ್ರೀನ್ ಮೇಲೆ ಬೆರಳಾಡಿಸುತ್ತಾ ಕುಳಿತೆ ಬಿಟ್ಟ.  ನನಗೆ ನಾನು ಕಂಡ ಹೊಸ ಪಕ್ಷಿ ಯಾವುದೆಂದು ಪುಸ್ತಕ ನೋಡಿ ಗುರುತಿಸಲು  ಸಾಧ್ಯವಾಗಲಿಲ್ಲ. ಆದರೆ ಟೆಕ್ಕಿ ರವಿಯ ಹಕ್ಕಿ ಫೋಟೋ ನೋಡಿ ನಮ್ಮ ಅಶ್ವಥ್ ರವರು ಇದು *ಅಲ್ಟ್ರಾ ಮೆರಿನ್ ಫ್ಲೈ ಕ್ಯಾಚರ್* ಎಂದು ನಿಖರವಾಗಿ ಗುರುತಿಸಿ ಬಿಟ್ಟಿದ್ದರು. ಅಲ್ಲದೆ ಈ ಹಕ್ಕಿ ಪ್ರತಿ ವರ್ಷ ಫೆಬ್ರವರಿ ತಿಂಗಳಲ್ಲಿ ಬನ್ನೇರುಘಟ್ಟದಲ್ಲಿ  ಕಾಣಿಸಿಕೊಳ್ಳುತ್ತೆ . ನಾನು ಕಳೆದ ವರ್ಷ ಕೂಡ ಕಂಡಿದ್ದೆ. ಇದು ಹಿಮಾಲಯದಿಂದ ವಲಸೆ ಬರುತ್ತದೆ. ಎಂದು ವಾಟ್ಸ್ ಅಪ್ ಲ್ಲೇ  ತಿಳಿಸಿದ್ದರು.

ಹಿಮಾಲಯವೆಲ್ಲಿ ಬೆಂಗಳೂರಿನ ಬನ್ನೇರುಘಟ್ಟವೆಲ್ಲಿ! ಈ ಎಬ್ಬೆರಳು ಗಾತ್ರದ ಹಕ್ಕಿ ಅಲ್ಲಿಂದ ಇಲ್ಲಿಗೆ ಹಾರಿ ಬರುವುದಾದರೂ ಹೇಗೆ ಎಂದು ಅಚ್ಚರಿಯಾಯಿತು. ಪಾಕಿಸ್ತಾನ, ನಾಗಲ್ಯಾಂಡ್, ಮಣಿಪುರ, ಅರುಣಾಚಲ ಪ್ರದೇಶದಲ್ಲಿ ಕಾಣಿಸುವ ಈ ಹಕ್ಕಿ , ಚಳಿಗಾಲ ಬಂತೆಂದರೆ ದಕ್ಷಿಣ ಭಾರತದ ಕಡೆ ವಲಸೆ ಬಂದು, ಎಪ್ರಿಲ್-ಮೇ ತಿಂಗಳಲ್ಲಿ ಮರದ ಅಂಚಿನಲ್ಲಿ ಆವಸೇ ಸಸ್ಯಗಳ ನಾರಿನಿಂದ ಮಾಡಿದ ಪುಟ್ಟ ಗೂಡು ಕಟ್ಟಿ. ಆ ಗೂಡಲ್ಲಿ ಮೂರ್ನಾಲ್ಕು ಮೊಟ್ಟೆಗಳು ಇಡುತ್ತವೆ.  ಮೊಟ್ಟೆಗಳು ಕೆಂಪಾಗಿದ್ದು ಅವುಗಳ ಮೇಲೆ ಹಸಿರು ಚುಕ್ಕೆಗಳಿರುತ್ತವೆ. ಗಂಡು ಹೆಣ್ಣು ಕೂಡಿ ಮರಿಗಳನ್ನು ಪೋಷಿಸುವ ಜವಾಬ್ದಾರಿಯನ್ನು ನಿಭಾಯಿಸುತ್ತವೆ. ಎಂದು ಒಂದೇ ಸಮನೆ ಹೈಸ್ಕೂಲ್ ಹುಡುಗ ಪಾಠ ಓದುವ  ರೀತಿ ಓದುತ್ತಾ ನಿಂತ ಟೆಕ್ಕಿ ರವಿ.

ನಾನು :        ಅಲ್ಲಾ ಕಣೊ ಕೊನೆಗೆ ಆ ಪಕ್ಷಿ ಕಾಣತಾ ನಿನಗೆ?

ಟೆಕ್ಕಿ   :  ನಾನು ನೋಡಲಿಲ್ಲ ನನ್ನ ಸ್ಮಾರ್ಟ್ ಫೋನ್ ನೋಡ್ತು!.      ಅಲ್ಲಿಗೆ ಮುಗಿಯಿತಲ್ಲ !.





# ಕಾಡು ಬರಿದಾಗಿಸುವ ಬೆಂಕಿ.

ಬನ್ನೇರುಘಟ್ಟ ರಾಷ್ಟೀಯ ಉದ್ಯಾನವನವು ಎಲೆ ಉದುರುವ ಕುರುಚಲು ಕಾಡಿನಿಂದ ಕುಡಿದ ಅರಣ್ಯ ಪ್ರದೇಶ. ಇಲ್ಲಿ ಬೇಸಿಗೆ ಬಂತೆಂದರೆ ಮರಗಳು ತಮ್ಮ ಎಲೆಗಳನ್ನು ಉದುರಿಸಿ ಬೋಳಾಗಿ ಅಸ್ಥಿ ಪಂಜರದಂತೆ ಕಾಣುತ್ತದೆ. ಬೇಸಿಗೆಯಲ್ಲಿ ಈ ಕಾಡಿಗೆ ಒಂದು ದೊಡ್ಡ ಕಂಟಕ ಎಂದರೆ ಬೆಂಕಿ.

ಬ್ಯಾಸಗೆ ಅಲ್ವಾ. . . ಬೆಂಕಿಕಡ್ಡಿ ಗೀರಿತೂ ಅಂದರೆ, ಕಿಡಿ ಗಾಳಿಗೆ ಹಾರಿ ಕಾಡು ಉರಿದೋಯ್ತುದೆ. ಏನೂ... ಮೆಳೆ, ಹುಲ್ಲು ಒಣಗಿ ನಿಂತದೆ. ಮಳೆಗಾಲ ಅಲ್ಲಾ ನೋಡು. ಏನೂ ಮಾಡಕಾಗಲ್ಲಾ! ಎಂದು ಬೆಂಕಿಕಡ್ಡಿ ಗಿರಿ ಬೀಡಿ ಸೇದುತ್ತಾ ಕುಂತವನೆ ಕುರಿ ಮೇಯಿಸೋ ಮಾರಣ್ಣ.

“ನಾವೂನು ಮನಸ್ರು ತಾನೆ? ಈ ಪಾಟಿ ಮೆಳೆಲೀ ಆನೆ ಎತ್ತರ ಉರಿ ಬೆಂಕಿ ಬರ್ತಾ ಇದ್ರೇ. ನಾವು ತಾನೆ ಏನು ಮಾಡಾಕಾಯ್ತುದೆ?. ಅದೂ ಈ ಹಸುರೆಲೆ ಹಿಡಕೊಂಡು ಬಾಯಿ ಬಡ್ಕೊಳಾನಾ? ಬೆಂಕಿಗೆ ಬಿದ್ದು ಸಾಯಾನಾ. . . . .? ನಮಗೂ ಮಕ್ಳ-ಮರಿ ಅಂತ ಅವರೆ ಮನೆಲಿ. ಎಂದು

ಬಿಸಿಯಾಗುತ್ತಾರೆ. ಪಾರೆಸ್ಟ್ ಗಾರ್ಡ್ ಲಕ್ಷ್ಮಣ್ಣ.







"ನಮ್ಮ ಈ ನಗರದ ಮುವತ್ತು ಕಿಲೋ ಮೀಟರ್ ಪರಿಧಿಲಿ ಉಳದಿರೋ ಕಾಡು ಅಂದ್ರೇ, ಅದೇ ನಮ್ಮ ರಾಗಳ್ಳಿ ಕಾಡು. ಇದೂ. . . . . ಒಂಥರಾ ಸ್ವಾಸಕೋಶ ಇದ್ದಂಗೆ. ಸಿಟಿಲಿರೋ ಕೆಟ್ಟಗಾಳಿನೆಲ್ಲಾ ಎಳಕೋಂಬುಟ್ಟು, ಒಳ್ಳೆ ಗಾಳಿ ಕೊಡೋ ಈ ಕಾಡಿಗೆ, ವನದೇವತೆಗೆ, ಅಮ್ಮ ಮಾರಮ್ಮನಿಗೆ , ಮುತ್ತರಾಯಸ್ವಾಗೆ ಬೆಂಕಿ ಕೊಡೊ ಪಾಪದ ಕೆಲಸಕ್ಕೆ ಕೈ ಹಾಕಬೇಡಿ" ಎಂದು ತಮ್ಮ ಎರಡೂ ಕೈ ಮುಗಿದು ಕೇಳ್ಬುಟ್ರು ನಮ್ಮ ದೊಡ್ಡ ಸಾಹೇಬ್ರು ಮೊನ್ನೆ ಗ್ರಾಂಪಂಚಾಯ್ತಿ ಮೀಟಿಂಗನಲ್ಲಿ. ಏನೇಳನಾ? ಎಂದು ಹೈಸೋಜಿಗ ವ್ಯಕ್ತ ಪಡಿಸತಾನೇ ನಲ್ಲಿಗೆ ನೀರು ಬಿಡೋ ಗೋಪಾಲ.



ಏನೋ ಒಂದೆರಡು ಒಣಸೌದೆ ಸಿಗಲಿ ಎಂದೋ, ಹಸಿರು ಹುಲ್ಲು ಬರಲಿ ಎಂದೋ, ಜನಾನೇನೆ ಕಾಡಿಗೆ ಬೆಂಕಿ ಹಾಕ್ತಾರೆ. ಇದರಲ್ಲಿ ಎರಡು ಮಾತಿಲ್ಲ. ಫಾರೇಸ್ಟ್ರು ಮ್ಯಾಲಿರೋ ದ್ವೇಷಕ್ಕೆ ವಾಚರ್ರು , ವಾಚರ್ ಮೇಲಿರೋ ದ್ವೇಷಕ್ಕೆ ಹಳ್ಳಿಗರು ಕಾಡಿಗೆ ಕಾಡನ್ನೇ ಸುಟ್ಟು ನಾಷಣ ಮಾಡಲು ಹೊರಟವರೇ.



ಚೆಕ್ಕು ಡ್ಯಾಮು ಕಟ್ಟಲು , ತಂತಿ ಬೇಲಿ ಹಾಕಲು, ಕೆರೆ ಕಟ್ಟಲು ರೋಡಿಗೆ, ಫೈರ್ ಲೈನ್ ಮಾಡಕ್ಕೆ, ರೋಡ್ ಸೈಡು ಕ್ಲಿಯರ್ ಮಾಡಿದ್ದೂ, ಕಾಡು ಕ್ಲಿಯರ್ ಮಾಡಿದ್ದು ಸಾಲದಾಯ್ತು. ಈ ಉರಿ ಬಿಸಿಲಿನಲ್ಲಿ ಕಾಡು ಪ್ರಾಣಿಗಳ ಗೋಳು ಹೇಳತೀರದು. ಮೊದಲೇ ಕುಡಿಯುವ ನೀರಿಲ್ಲ!. ತಿನ್ನಲು ಮೇವು ಮೊದಲೇ ಇಲ್ಲ! ಜೊತೆಗೆ ಬೆಂಕಿ ಬೇರೆ . ಇದ್ದ ತರಗು , ಒಣ ಹುಲ್ಲ-ಮೇವನ್ನು ಸುಟ್ಟು ಬೂದಿಯಾಗಿಸಿದೆ. ಇದರ ಜೊತೆಗೆ ಕಳ್ಳ ಬೇಟೆಗಾರರು, ಭೂಗಳ್ಳರು , ಮರಳುಗಳ್ಳರು, ಮರಗಳ್ಳರು ಸೇರಿಕೊಂಡರೆ ಎಲ್ಲವೂ ಮುಗಿದ ಹಾಗೆಯೇ!.

ಬಿರು ಬೇಸಿಗೆಯಲ್ಲೂ ಎಲ್ಲೋ ಅಲ್ಲಲ್ಲಿ ಕಾಣಸಿಗುವ ನೀರಿನ ಒರತೆಯ ಬಳಿ ಸಿಗುವ ನೀರಿನಂತೆ , ಈ ಮಾನವರ ಕ್ರೌರ್ಯಕ್ಕೆ ಸರಿಸಾಟಿಯಾಗಿ ಎದುರು ನಿಲ್ಲುವ ಏಕೈಕ ಭಾವನೆಯೇ ಆಶಾಭಾವನೆ. ತಡಿ ಇಂದಲ್ಲಾ ನಾಳೆ ಮಳೆ ಬರುತ್ತದೆ. ಮುಂಗಾರು ಬರುತ್ತೆ . ಅದೋ ಅಲ್ಲಿ ಪಶ್ಚಿಮದಿಂದ ತಣ್ಣನೆ ಗಾಳಿ ಬೀಸಲು ಶುರು ಮಾಡಿದೆ. ಮೋಡವಾಗಿದೆ, ಹನಿಗಟ್ಟಿ ಮಳೆಸುರಿಯದೇ ಎಂದು ಮೌನವಾಗಿ ಕಾಯುವುದು. ಜೀವವನ್ನು ಉಳಿಸಿಕೊಳ್ಳುವುದು.

ಈ ಬೆಂಕಿಯೋ ಅಡ್ಡ ಸಿಕ್ಕ ಸಕಲವನ್ನು ದೂಸರ ನೋಡದೆ ಸುಟ್ಟು ಭಸ್ಮ ಮಾಡಾಕುತ್ತೆ. ಬೆಂಕಿ ಕಾಡಿಗೆ ಬಿಳದಿರದಂತೆ ಕಾಯುವ ಸರ್ಕಾರದ ಆಳು-ಕಾಳು ಇದ್ದಾರೆ. ಅವರೇ ಒಮ್ಮೊಮ್ಮೆ ಪೈರ್ ಲೈನ್ ಮಾಡ್ತೀವಿ ಎಂದೂ ಕಾಡಿಗೆ ಬೆಂಕಿ ಕೊಟ್ಟು ಬಿಡುತ್ತಾರೆ. ಅದು ಉರಿದು ಉರಿದು ಕಾಡೆಲ್ಲಾ ಸುಟ್ಟು ತಣ್ಣಗಾಗುತ್ತದೆ. ಚೆಕ್ಕು-ಬಿಲ್ಲು ಪಾಸ್ ಆಗುತ್ತದೆ. ಕಾಡಿಗೆ ಮತ್ತೆ ಎಲ್ಲೂ ಬೆಂಕಿ ಬೀಳಲು ಒಂದು ಅಂಗುಲ ಜಾಗವಿಲ್ಲದ ಹಾಗೆ ಪೈರ್ ಲೈನ್ ಮಾಡೋದು. ಅಂದರೇ ಕಾಡಿಗೆ ಬೆಂಕಿ ಬಿಳುವುದಕ್ಕಿಂತಾ ಮುಂಚಿತವಾಗಿ ಕಾಡನೆಲ್ಲಾ ಗೌರ್ಮೆಂಟೇ ಕಾಸು ಕೊಟ್ಟೆ ಸುಟ್ಟಾಕಿಸಿ ಬಿಡೋದು ಎನ್ನುವಂತಾಗಿದೆ. ಕೊನೆಯಲ್ಲಿ ನೀವು ಕೂಡ *ಏನೂ ಮಾಡಲು ಆಗೋಲ್ಲಾ ! ಎನ್ನದೆ ಏನು ಇಕಮತ್ ಮಡಬಹುದು. ನಮ್ಮ ಕಾಡನ್ನ ಬೆಂಕಿಯಿಂದ ತಪ್ಪಿಸಕೆ. ಎಂದು ನಿಮಗೇನಾದರೂ ಹೊಳೆದರೆ ಕಾನನಕ್ಕೆ ಬರೆದು ತಿಳಿಸಿ.*



# ಪ್ರಕೃತಿ ಯಿಂದಲೇ



ಸ್ವರ ತಾಳ ಲಯವಿ
ಹಾಡುವ ಹಕ್ಕಿಯ ದನಿಗೆ
ಬಂದು ಸೇರಿದೆ ಮನ

ಸುಗಂಧ ಪರಿಮಳ ಬೀರಿ
ಅರಳಿದ ಹೂವು ಸೊಬಗಿಗೆ
ಹೀರ ಬಂದಿದೆ ಪತಂಗ

ನಾಟ್ಯ ಪ್ರತಿಭೆಗೆ
ಸೌಂದರ್ಯದ ಸವಿಗೆ
ಸೋತು ನಿಂತಿದೆ ಮನ

ನೋವು ನಲಿವಿನ
ಭಾವ ತರಂಗಕೆ
ಕಂಪಿಸಿದೆ ಜೀವ

ನವ ಬೆಳಕಿನ
ಹಸಿರ ಚಿತ್ರಕೆ
ಬೆರಗುಗೊಂಡಿದೆ ತನು

- ಕೃಷ್ಣನಾಯಕ್

